# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್

ರಿಜಿಸ್ಟರ್ಡ್ ನಂ. ಕೆಆರ್ ಎನ್ ಎಸ್ — ೧೯

ಸಂಪುಟ ೧ ಸಂಚಿಕೆ ೧೪ ಕೊಪ್ಪ ೨೮-೧೧-೮೨ ಭಾನುವಾರ ಬೆಲೆ ೪೦ ಪೈಸೆ


ರಾಜ್ಯ ವಿಧಾನ ಸಭೆಗೆ

## ಜ. ೫ರಂದು ಚುನಾವಣೆ

ಕರ್ನಾಟಕ ವಿಧಾನ ಸಭೆಗೆ ೧೯೮೩ರ ಜನವರಿ ೫ರಂದು ಚುನಾವಣೆ ನಡೆಯಲಿರುವುದಾಗಿ ಚುನಾವಣಾ ಆಯೋಗ ಘೋಷಿಸಿದೆ. ಹಾಲಿ ವಿಧಾನ ಸಭೆಯ ಅವಧಿ ಮಾ. ೧೬ಕ್ಕೆ ಕೊನೆಗೊಳ್ಳಲಿತ್ತು. ಆಂಧ್ರ ಮತ್ತು ತ್ರಿಪುರಗಳಲ್ಲೂ ಅದೇ ದಿನ ಚುನಾವಣೆ ನಡೆಯುವುದು.

ಫೆಬ್ರವರಿಯಲ್ಲಿ ಪಟಾಕಿ ಸಿಡಿಯುವುದೆಂದು ದೂರದಿಂದ ಕಿವಿಗೆ ಕೈಯಿಟ್ಟು ನೋಡುತ್ತಿದ್ದ ವಿರೋಧೀ ಚಿಣ್ಣರಿಗೆ ಆ ಪಟಾಕಿ ಚಿಗಿದು ಕಾಲುಬುಡದಲ್ಲೇ ಢಮಾರ್!?

## ಶೃಂಗೇರಿ: ರೈತ ಸಂಘದ ನೇತೃತ್ವದಲ್ಲಿ ಬಾರಿ ಭಾರಿ ಸಜ್ಘಟನೆ, ಉಗ್ರಪ್ರತಿಭಟನೆ

ಶೃಂಗೇರಿ: ನ. ೨೫ರಂದು ಸಾವಿರಕ್ಕೂ ಹೆಚ್ಚು ಜನ ಹಸಿರು ಪಟ್ಟಿ-ಪೇಟ ಹೊತ್ತ ರೈತರು ೩ ಟ್ರಾಕ್ಟರ್, ೨೦ ಟಿಲ್ಲರ್ ಮತ್ತು ೧೦೦ಕ್ಕೂ ಹೆಚ್ಚು ಎತ್ತಿನ ಗಾಡಿಗಳೊಡನೆ, ಗಗನಕ್ಕೇರಿದ ಘೋಷಣೆಗಳೊಡನೆ ಇಲ್ಲಿನ ಬೀದಿಗಳನ್ನು ನಡುಗಿಸಿದರು, ತಮ್ಮ ಬೇಡಿಕೆ ಈಡೇರದ ಬಗ್ಗೆ ಉಗ್ರವಾಗಿ ಪ್ರತಿಭಟಿಸಿದರು; ಮತ್ತು ಧರಣಿ ಪ್ರಾರಂಭಿಸಿದರು ಡಿಸೆಂಬರ್ ೩ರ ವರೆಗೆ ಧರಣಿ ಮುಂದುವರಿಯುತ್ತದೆ.

### ಬೇಡಿಕೆಗಳು

ತಾಲ್ಲೂಕಿನಲ್ಲಿ ನೀರಿನ ತೆರಿಗೆ ರದ್ದುಪಡಿಸಬೇಕು; ಅತೀ ಸಣ್ಣ ರೈತರು ತಮ್ಮ ಜಮೀನಿನ ಅಕ್ಕಪಕ್ಕ ಮಾಡಿಕೊಂಡಿರುವ ಒತ್ತುವರಿಯನ್ನು ಅವರಿಗೇ ಖಾಯಂ ಮಾಡಬೇಕು; ಪ್ರತಿ ಸೋಮವಾರ ತಾ। ಕಚೇರಿಯಲ್ಲಿ ಅಧಿಕಾರಿಗಳು ರೈತರ ಕುಂದುಕೊರತೆಗಳನ್ನು ವಿಚಾರಿಸಿ ಅರ್ಜಿ ವಿಲೇವಾರಿ ಮಾಡಬೇಕು; ಸರ್ಕಾರಿ ಕಚೇರಿಗಳಲ್ಲಿ ಅರ್ಜಿಗಳಿಗೆ ಕಡ್ಡಾಯವಾಗಿ ಹಿಂಬರಹ ಕೊಡಬೇಕು; ಹಾಲು ಕೊಳ್ಳುವ ಕೇಂದ್ರಗಳನ್ನು ಕೂಡಲೇ ತೆರೆಯಬೇಕು ಮುಂತಾದುವು ರೈತರ ಪ್ರಮುಖ ಬೇಡಿಕೆಗಳು.

## ತೋಟಕಾರ್ಮಿಕರ ಬೃಹತ್ ಪ್ರದರ್ಶನ

ಕೊಪ್ಪ: ಒಳ್ಳೆಯ ಮನೆ,ವೈದ್ಯಕೀಯ ಮತ್ತು ಶಿಕ್ಷಣ ಸೌಲಭ್ಯ, ಶುದ್ಧವಾದ ಕುಡಿವ ನೀರು; ಸರ್ಕಾರ ನಿಗದಿಪಡಿಸಿದ್ದ ಕನಿಷ್ಠ ಕೂಲಿಯನ್ನು (೮.೫೦ರೂ.) ಫೆ.೧೫ ರಿಂದ ಜಾರಿ ಗೊಳಿಸುವುದು, ಕಾರ್ಮಿಕ ಮಂತ್ರಿ ಎ.ಬಿ.ಜಕನೂರ್ ವಜಾ—ಈ ಬೇಡಿಕೆಗಳನ್ನು ಒತ್ತಾಯಿಸಿ ವಿವಿಧ ಕಾರ್ಮಿಕ ಸಂಘಗಳಿಗೆ ಸೇರಿದ ಕಾರ್ಮಿಕರು ನ. ೨೬ರಂದು ಜಿಲ್ಲಾದ್ಯಂತ ಬೃಹತ್ ಪ್ರದರ್ಶನ ನಡೆಸಿದರು. ಕೊಪ್ಪದಲ್ಲಿ ಸಮ ಸಂಖ್ಯೆಯ ಮಹಿಳೆಯರೂ ಸೇರಿದಂತೆ ೧೫೦೦ಕ್ಕೂ ಹೆಚ್ಚು ಜನ ಭಾಗವಹಿಸಿದ್ದರು.

## ರೆವಿನ್ಯೂ ಇನ್ಸ್‌ಪೆಕ್ಟರ್ ಮೇಲೆ ಹಲ್ಲೆ: ಬಂಧನ-ಬಿಡುಗಡೆ

ಜಯಪುರ: ಇನ್ಸ್‌ಪೆಕ್ಟರ್ ಕಂದಾಯ ಇಲಾಖೆ ರಾಜಸ್ವ ನಿರೀಕ್ಷಕರ ಮೇಲೆ ಜಿಲ್ಲಾ ಕಾಂಗ್ರೆಸ್ ಹಾಗೂ ತಾ॥ ಭೂಮಿ ಮಂಜೂರಾತಿ ಸಮಿತಿ ಸದಸ್ಯ ಮಾರ್ಶಲ್ ಲೋಬೋ ಎಂಬವರು ಹಲ್ಲೆನಡೆಸಿದ್ದಾಗಿ ವರದಿಯಾಗಿದೆ.

ನ. ೨೧ರಂದು ಈ ಪ್ರಕರಣ ನಡೆದಿದ್ದು, ಶೃಂಗೇರಿ ಪೋಲೀಸರು ಲೋಬೋರನ್ನು ಬಂಧಿಸಿ, ಜಾಮೀನಿನ ಮೇಲೆ ಬಿಡುಗಡೆ ಮಾಡಿದ್ದಾರೆಂದು ಹೇಳಲಾಗಿದೆ.

## ಎಮ್ಮೆ ವಿತರಣೆ

ಕೊಪ್ಪ: ಸ.ಗ್ರಾ.ಅ. ಯೋಜನೆ ಆಶ್ರಯದಲ್ಲಿ ತಾಲ್ಲೂಕಿನ ೨೧ ಜನ ಬಡವರಿಗೆ ೩೦ ಕ್ಕೂ ಹೆಚ್ಚು ಎಮ್ಮೆಗಳನ್ನು ನ. ೨೫ ರಂದು ಹಂಚಲಾಯಿತು.

ನಾರ್ವೆ ಕರ್ನಾಟಕ ಬ್ಯಾಂಕ್, ಬಸ್ರಿಕಟ್ಟೆ ಸಿಂಡಿಕೇಟ್ ಬ್ಯಾಂಕ್, ಕೊಪ್ಪದ ಮೈಸೂರು ಬ್ಯಾಂಕ್ ಮತ್ತು ಇಂಡಿಯನ್ ಬ್ಯಾಂಕ್ ಇವು ಹಣಕಾಸಿನ ನೆರವು ನೀಡಿವೆ.

## ಕೊಪ್ಪದಲ್ಲಿ ಲಯನ್ಸ್ ಕ್ಯಾಬಿನೆಟ್ ಸಭೆ

ಕೊಪ್ಪ: ಲಯನ್ಸ್ ಕ್ಲಬ್ಬಿನ ೩೨೪ - ಡಿ-೪ ಜಿಲ್ಲೆಯ ಕ್ಯಾಬಿನೆಟ್ ಸಭೆಯನ್ನು ಕೊಪ್ಪದ ಕ್ಲಬ್ ಇತಿಹಾಸದಲ್ಲಿ ಇದೇ ಮೊದಲ ಬಾರಿಗೆ ನ. ೨೧ರಂದು ಏರ್ಪಡಿಸಲಾಗಿತ್ತು.

ಜಿಲ್ಲಾ ಗವರ್ನರ್ ಲ। ಡಾ। ಕೆ.ಬಾಬು ಶೆಟ್ಟಿ, ಕ್ಯಾಬಿನೆಟ್ ಕಾರ್ಯದರ್ಶಿ ಲ। ವೈ. ಕೆ.ಸಂಜೀವ ಶೆಟ್ಟಿ ಮತ್ತು ಖಜಾಂಚಿ ಲ। ಸೋಮಪ್ಪ ಸುವರ್ಣ ಸೇರಿದಂತೆ ೫೬ ಜನ ಸದಸ್ಯರು ಭಾಗವಹಿಸಿದ್ದರು.

### ಸಿಹಿ ಮೂತ್ರ ರೋಗಿಗಳ ತಪಾಸಣೆ

ನ ೨೦ರಂದು ಇದೇ ಕ್ಲಬ್ಬಿನ ಆಶ್ರಯದಲ್ಲಿ ಮಣಿಪಾಲದ ಕಸ್ತೂರಿಬಾ ವೈದ್ಯಕೀಯ ಕಾಲೇಜಿನ ತಜ್ಞರಾದ ಡಾ॥ ವಿಠಲ ರಾವ್ ಅವರು ಸಿಹಿಮೂತ್ರ ರೋಗದ (ಡಯಾಬಿಟಿಸ್) ಬಗ್ಗೆ ಉಚಿತ ಪರೀಕ್ಷೆ ಮತ್ತು ಚಿಕಿತ್ಸೆ ನಡೆಸಿದರು. ೩೬ ಜನ ಈ ಶಿಬಿರದ ಪ್ರಯೋಜನ ಪಡೆದರು. ಈ ಕಾಯಿಲೆ ಬಗ್ಗೆ ವಿವರಣಾತ್ಮಕ ಭಾಷಣ ಮಾಡಿದ ಡಾ। ರಾವ್ ಹಲವು ಸ್ಲೈಡ್ ಗಳನ್ನೂ ತೋರಿಸಿದರು.

ಚಿಕ್ಕಮಗಳೂರು: 'ಮುಂಜಾವು' ಸಂಪಾದಕರ ಮೇಲೆ ನ. ೧೨ರಂದು ನ.ರಾ.ಪುರದಲ್ಲಿ ಕೆಲವರು ಕೈ ಮಾಡಲು ಯತ್ನಿಸಿದ್ದನ್ನು ಅಖಿಲ ಭಾರತ ವಿದ್ಯಾರ್ಥಿ ಫೆಡರೇಶನ್ನಿನ ಜಿಲ್ಲಾ ಸಮಿತಿ ತೀವ್ರವಾಗಿ ಖಂಡಿಸಿದೆ.

## ರೈತ ಸಭೆಗೆ ಕರೆ

ಕೊಪ್ಪ: ೨-೧೨-೮೨ರ ಬೆಳಿಗ್ಗೆ ೧೦-೩೦ಕ್ಕೆ ತಾ॥ ರೈತ ಸಮಿತಿಯ ಸಭೆಯನ್ನು ಅಡಿಕೆ ಬೆಳೆಗಾರರ ಸಂಘದ ಕಚೇರಿಯಲ್ಲಿ ಕರೆದಿದ್ದು, ರೈತರು ತಪ್ಪದೆ ಹಾಜರಾಗಿ ಸಲಹೆ ಸಹಕಾರ ನೀಡಬೇಕೆಂದು ಸಮಿತಿಯ ಅಧ್ಯಕ್ಷ ಹೆಚ್.ಜಿ.ಗೋವಿಂದ ಗೌಡರು ಕೋರಿದ್ದಾರೆ. ರೈತ ರ್‍ಯಾಲಿ ಬಗ್ಗೆ ಹಾಗೂ ನೀರಿನ ತೆರಿಗೆ ಬಗ್ಗೆ ವಿಚಾರ ವಿನಿಮಯ ಇರುತ್ತದೆ.

## ನ.ರಾ.ಪುರದಲ್ಲಿ ನಡೆದ ಜಿಲ್ಲಾ ಕವಿಗೋಷ್ಠಿ

ನ.ರಾ.ಪುರ: ಜಿಲ್ಲಾ ಲೇಖಕರ ಸಂಘದ ಆಶ್ರಯದಲ್ಲಿ ನ. ೨೧ರಂದು ಇಲ್ಲಿ ನಡೆದ ಜಿಲ್ಲಾ ಕವಿ ಗೋಷ್ಠಿಯಲ್ಲಿ ಜಿಲ್ಲೆಯ ೩೫ ಕ್ಕೂ ಹೆಚ್ಚು ಕವಿಗಳು ಭಾಗವಹಿಸಿದ್ದರು.

ಬಿ.ಟಿ.ಲಲಿತಾ ನಾಯ್ಕ ಅಧ್ಯಕ್ಷತೆ ವಹಿಸಿದ್ದರು. ಸಾ. ಡಿಸೋಜ ಮುಖ್ಯ ಅತಿಥಿಗಳಾಗಿದ್ದರು. ಸಂಘದ ಹಿಂದಿನ ಅಧ್ಯಕ್ಷ ಹಾಗೂ 'ತುಮಕೂರು ವಾರ್ತೆ' ಸಂಪಾದಕ ಹೆಚ್. ಎಸ್. ರಾಮಣ್ಣ ಕವಿ ಗೋಷ್ಠಿ ಉದ್ಘಾಟಿಸಿದರು.

ಪ್ರಾರಂಭದಲ್ಲಿ ಆನಂದ ಕಂದ, ದಿನಕರ ದೇಸಾಯಿ ಇವರುಗಳ ನಿಧನಕ್ಕೆ ಸಂತಾಪ ಸೂಚಿಸಲಾಯಿತು. ಎಂ. ಐ. ಶ್ರೀನಿವಾಸ ಮೂರ್ತಿ ಸ್ವಾಗತಿಸಿ, ನ. ಸು. ರವಿಶಂಕರ್ ಸಂದೇಶ ಓದಿದರು. ಜಿ.ಎಸ್.ಜ್ವಾಲನಪ್ಪ ಅತಿಥಿಗಳ ಪರಿಚಯ ಮಾಡಿದರು ಹುಲಿಕೆರೆ ಮಂಜುನಾಥ್ ವಂದಿಸಿದರು.

ಕೊಪ್ಪ: ನ. ೨೮ರಂದು ಇಲ್ಲಿ ನಡೆದ ಶೃಂಗೇರಿ ಕ್ಷೇತ್ರದ ಎಲ್ಲಾ ವಿರೋಧ ಪಕ್ಷಗಳ ಸಭೆಯಲ್ಲಿ ಜನತಾದ ಹೆಚ್. ಜಿ. ಗೋವಿಂದ ಗೌಡರು ಕಾಂಗ್ರೆಸ್ ವಿರುದ್ಧ ವಿರೋಧ ಪಕ್ಷಗಳ ಒಮ್ಮತದ ಅಭ್ಯರ್ಥಿಯಾಗಿ ಸರ್ವಾನುಮತದಿಂದ ಆಯ್ಕೆಯಾಗಿದ್ದಾರೆ. ಅವರಿಗೆ 'ಮುಂಜಾವು' ಬಳಗದ ಹಾರ್ದಿಕ ಶುಭಾಶಯಗಳು.

## ಕಾಡೆಮ್ಮೆಗಳ ಹಾವಳಿ: ಗುಂಡಿಗೆ ೧ ಕಾಡೆಮ್ಮೆ ಬಲಿ

ಕೊಪ್ಪ: ಇಲ್ಲಿಗೆ ಸಮೀಪದ ಸೂರ್ಯದೇವಸ್ಥಾನದ ಬಳಿ ಒಂದು ಕಾಡೆಮ್ಮೆ ಕೊಲ್ಲಲಾಗಿದೆ. ಹಳ್ಳಿಗರನ್ನು ನಮ್ಮ ಪ್ರತಿನಿಧಿ ವಿಚಾರಿಸಿದಾಗ, "ಈ ವರ್ಷ ಕಾಡೆಮ್ಮೆ ಹಾವಳಿಯಲ್ಲಿ ಸುಮಾರು ೧೮ ಎಕರೆ ಗದ್ದೆ ಧ್ವಂಸವಾಗಿದೆ. ನ. ೨೬ರ ಬೆಳಗಿನ ಜಾವ ಗದ್ದೆ ಕಾಯುತ್ತಿದ್ದ ಹೊಸಮನೆ ರಾಜಿನಾಯ್ಕ ಎಂಬವರನ್ನು ಅರಣ್ಯ ಇಲಾಖೆಯವರು ಕರೆದುಕೊಂಡು ಹೋಗಿ ಹೇಳಿಕೆ ಪಡೆದು ಬಿಟ್ಟಿದ್ದಾರೆ. ಈಗ ಗದ್ದೆ ಕಾವಲಿಗೆ ಯಾರೂ ಸಿಗುತ್ತಿಲ್ಲ." ಎಂದರು. ಈ ವರೆಗೆ ಯಾರನ್ನೂ ಹಿಡಿದಿಲ್ಲವೆಂದು ಅರಣ್ಯಾಧಿಕಾರಿ ಕೆ. ಸುಂದರ ನಾಯಕ್ ತಿಳಿಸಿದರು.

ನ. ೨೦ರಂದು ಕುದ್ರೆಗುಂಡಿ ಬಳಿ ವೇಗವಾಗಿ ಬರುತ್ತಿದ್ದ ಲಾರಿಯೊಂದು ಮಗುಚಿ ನಾಲ್ವರಿಗೆ ಗಾಯಗಳಾಗಿವೆ. ಪ್ರಾಣಾಪಾಯವಿಲ್ಲ.

# ವೇದಿಕೆ

## ಶರಾಬು ಮಾರಾಟ: ಇನ್ನಷ್ಟು ಸಲಹೆ

ತಾ.೭-೧೧-೮೨ರ 'ಮುಂಜಾವು'ನಲ್ಲಿ ಪ್ರಕಟವಾದ "ಶರಾಬು ಮಾರಾಟ: ಸರ್ಕಾರಕ್ಕೊಂದು ಸಲಹೆ" ಎಂಬ ವಿಚಾರದ ಬಗ್ಗೆ ನನ್ನ ಅನಿಸಿಕೆಯನ್ನು ಇಲ್ಲಿ ಬರೆಯುತ್ತಿದ್ದೇನೆ.

ಶರಾಬು ಮಾರಾಟಕ್ಕೆ ಈಗ ಸರ್ಕಾರವು ಅನುಸರಿಸುತ್ತಿರುವ ಗುತ್ತಿಗೆ ಪದ್ಧತಿಯನ್ನು ಸಂಪೂರ್ಣವಾಗಿ ನಿಲ್ಲಿಸಬೇಕು. ನೇರವಾಗಿ ಜನರಿಗೆ ತಮಗೆ ಬೇಕಾದ ಮದ್ಯವನ್ನು ತಯಾರಿಸಿಕೊಳ್ಳಲು ಅವಕಾಶ ಮಾಡಿಕೊಡಬೇಕು. ಗ್ರಾಮಪಂಚಾಯ್ತಿಗಳ ಮೂಲಕ ಲೈಸೆನ್ಸ್ ಕೊಡುವ ಪದ್ಧತಿಯನ್ನು ಜಾರಿಗೆ ತರಬೇಕು. ಹಳ್ಳಿಯ ರೈತರು ತಾವು ಬೆಳೆದು ಕೊಂಡಿರುವ ಗೇರು ಹಣ್ಣು, ಅನಾನಸ್, ಕಬ್ಬು, ಭತ್ತ ಮತ್ತು ಇನ್ನೂ ಇತರೆ ಅನೇಕ ವಸ್ತುಗಳಿಂದ ತಮಗೆ ಬೇಕಾದ ಹೆಂಡ, ಶರಾಬು, ಶೇಂದಿ ಇವುಗಳನ್ನು ತಯಾರಿಸಿಕೊಳ್ಳುತ್ತಾರೆ. ಯಾರಿಗೂ ಕೂಡ ಇದರ ತಯಾರಿಕೆಯಲ್ಲಿ ತರಬೇತಿಯ ಅಗತ್ಯವಿಲ್ಲ. ಇದು ಬಹಳ ಹಿಂದಿನಿಂದ ನಡೆದುಕೊಂಡು ಬಂದಿರುವ ಒಂದು "ಗುಡಿ ಕೈಗಾರಿಕೆ"ಯಾಗಿದೆ.

ಬ್ರಿಟೀಷರು ನಮ್ಮನ್ನು ಆಳುವಾಗಲಿ ರೈತರಿಗೆ ತಮಗೆ ಬೇಕಾದ ಹೆಂಡ, ಶೇಂದಿಯನ್ನು ತಯಾರುಮಾಡಿಕೊಳ್ಳಲು ಕಾನೂನು ಬದ್ಧವಾದ ವ್ಯವಸ್ಥೆಯನ್ನು ಮಾಡಿದ್ದರು. ಆರೋಗ್ಯಕ್ಕೆ ಉತ್ತಮವಾದ ಹೆಂಡ, ಶೇಂದಿ, ಇವುಗಳನ್ನು ಹಿಂದಿನವರು ಬೆಳಿಗ್ಗೆ ಎದ್ದು "ಬೆಡ್ ಕಾಫಿ"ಯಾಗಿ ಉಪಯೋಗಿಸಿಕೊಂಡು ದೃಢಕಾಯರಾಗಿದ್ದರು.

ಗೋವದಲ್ಲಿ ಇದರ ಸ್ಥಳೀಯ ಗುಡಿ ಕೈಗಾರಿಕೆ ಬಹಳ ಯಶಸ್ವಿಯಾಗಿದೆ. ನಮ್ಮ ಸರ್ಕಾರವು ಪ್ರಾಯೋಗಿಕವಾಗಿ ಕೆಲವು ತಾಲ್ಲೂಕುಗಳಲ್ಲಾದರೂ ಪ್ರಾರಂಭಿಸಲಿ.

ತಮಗೆ ಬೇಕಾದ ಮದ್ಯವನ್ನು ತಯಾರಿಸಿಕೊಳ್ಳಲಾರದವರಿಗೆ ಅನುಕೂಲವಾಗುವಂತೆ ನೇರವಾಗಿ ಸರ್ಕಾರವೇ ಪ್ರತಿ ತಾಲ್ಲೂಕಿನಲ್ಲೂ ೮-೧೦ ಅಂಗಡಿಗಳನ್ನು ತೆರೆಯಬೇಕು. ಮೊಹರು ಮಾಡಿದ ಬಾಟಲಿಗಳಲ್ಲಿ ನಿಗದಿತ ದರದಲ್ಲಿ ಮಾರಾಟ ಮಾಡಬೇಕು.

ಈ ವ್ಯವಸ್ಥೆಯಿಂದ ಭ್ರಷ್ಟಾಚಾರವು ತಪ್ಪುತ್ತದೆ. ಸ್ಥಳೀಯ ಗುಡಿ ಕೈಗಾರಿಕೆಗಳು ಬೆಳವಣಿಗೆಯಾಗುತ್ತವೆ. ಗ್ರಾಮಪಂಚಾಯಿತಿಗಳು ಹೆಚ್ಚು ವರಮಾನಗಳನ್ನು ಗಳಿಸಿಕೊಳ್ಳಬಹುದು.

**ಹೆಗ್ಗಾರು ಜಯಂತ್.**

## ಹಿರೇಹುಲುಗಾರು ಗಿರಿಜನರಿಗೆ ಸೌಲಭ್ಯ:
# "ಗಾಡಿ ಮುಂದೆ, ಎತ್ತು ಹಿಂದೆ" ಆದೀತೆ?

ಶಾನುವಳ್ಳಿ: ಹರಿಜನ-ಗಿರಿಜನ, ಹಿಂದುಳಿದವರ ಅಭಿವೃದ್ಧಿಗಾಗಿ ಸರ್ಕಾರ ಜಾರಿಗೆ ತರುವ ಹಲವು ಯೋಜನೆಗಳು ಇಲ್ಲಿಗೆ ಸಮೀಪದ ಹಿರೇಹುಲುಗಾರು ಎಂಬಲ್ಲಿರುವ ಗಿರಿಜನರಾದ ೧೪ ಹಸ್ಲರ ಕುಟುಂಬಗಳಿಗೆ ಮಿಶ್ರಫಲತಂದಿರುವುದನ್ನು ಕಾಣಬಹುದು.

ಗಿರಿಜನ ಅಭಿವೃದ್ಧಿ ಯೋಜನೆ ಹಾಗೂ ಪಶ್ಚಿಮ ಘಟ್ಟ ಅಭಿವೃದ್ಧಿ ಯೋಜನೆಗಳ ಅಡಿಯಲ್ಲಿ ಇವರೆಲ್ಲರಿಗೂ ಹಾರೆ, ಪಿಕಾಸಿ, ಇಸಮುಳ್ಳು, ಸಬ್ಬಲ್ಲು, ಕಬ್ಬಿಣದ ನೇಗಿಲು ಮುಂತಾದ ಸಲಕರಣೆಗಳನ್ನು ಕೊಡಲಾಗಿದ್ದು, ಅವನ್ನು ಇವರು ಜೋಪಾನವಾಗಿ ಇಟ್ಟುಕೊಂಡಿದ್ದಾರೆ. ಯಾರೂ ಗೈರುವಿಲೆ ಮಾಡಿಲ್ಲ.

ಬರೀ ಇಟ್ಟುಕೊಂಡರೆ ಆಯಿತಾ? ಕೃಷಿಯಲ್ಲಿ ಬಳಸಬೇಕಲ್ಲ?

ಬಳಸುತ್ತಿದ್ದರು. ಆದರೆ ಅವರಾರಿಗೂ ಸ್ವಂತ ಸಾಗುವಳಿ ಇಲ್ಲ.

ಯಾಕಿಲ್ಲ? ಅವರಿಗೆಲ್ಲ ೧೯೭೮ರಲ್ಲೇ ಜಮೀನು ಮಂಜೂರಾಗಿದೆಯಲ್ಲ? ಅಷ್ಟೇ ಅಲ್ಲ, ಅಲ್ಲಿರುವ ಹಳ್ಳಕ್ಕೆ ಸದ್ಯದಲ್ಲೇ ಪಿಕ್ ಅಪ್ ಕಟ್ಟಿಸಿ, ಅವರೆಲ್ಲರ ಜಮೀನಿಗೂ ನಿರಂತರ ನೀರು ಒದಗಿಸುವ ಬಗ್ಗೆ ಯೋಜನೆ ತಯಾರಾಗುತ್ತಿದೆಯಂತಲ್ಲ?

ಹೌದು. ೧೯೭೮ರಲ್ಲಿ ಇಂದಿರಾಗಾಂಧಿಯವರ ಚುನಾವಣೆ ಸಮಯದಲ್ಲಿ ಆಗಿನ ಮಂತ್ರಿ ಬಿ.ಬಸವಲಿಂಗಪ್ಪನವರು ಈಕಡೆ ಬಂದಿದ್ದಾಗ ಗಡಿಬಿಡಿಯಲ್ಲಿ ಇವರಿಗೆಲ್ಲ ಭೂಮಿ ಹಂಚಿರುವುದು ನಿಜ. ಅದೆಲ್ಲ ಇನ್ನೂ ಇವರ ಸುಪರ್ದಿನಲ್ಲೇ ಇದೆ. ಪಿಕ್ ಅಪ್ ನಿರ್ಮಿಸುವ ಯೋಜನೆ ಇರುವುದೂ ನಿಜವಂತೆ. ಆದರೆ ಪಿಕ್ ಅಪ್ ನಿರ್ಮಿಸುವ ಮೊದಲು ಜಮೀನನ್ನು ಸಾಗುವಳಿಗೆ ತರುವ ಕೆಲಸ ಮೊದಲು ಆಗಬೇಕಾಗಿತ್ತು.

ಅದು ಯಾಕೆ ಇನ್ನೂ ಆಗಿಲ್ಲವೆಂದರೆ– ಇವರಿಗೆ ಮಂಜೂರಾಗಿರುವ ಭೂಮಿಯಲ್ಲಿರುವ ಮರಗಳು ಅರಣ್ಯ ಇಲಾಖೆಗೆ ಸೇರಿವೆ. ಅವನ್ನು ಆ ಇಲಾಖೆ ಹರಾಜು ಮಾಡಿ, ಜಮೀನು ಬಿಡಿಸಿಕೊಡಬೇಕು. ಆ ಕೆಲಸವನ್ನು ಅರಣ್ಯ ಇಲಾಖೆ ಇನ್ನೂ ಮಾಡಿಲ್ಲ.

ಕೇವಲ ೩ ಜನರಿಗೆ ಮಾತ್ರ ಸ್ವಂತ ಸಾಗುವಳಿ ಮಾಡುವುದು ಸಾಧ್ಯವಾಗಿದೆ. ಉಳಿದವರ್ಯಾರಿಗೂ ಪಹಣಿ ಇಲ್ಲ. ಹಾಗಾಗಿ ಇನ್ನೂ ಕೆಲವು ಸೌಲಭ್ಯಗಳಿಗೆ ತೊಂದರೆಯಾಗಿದೆ. ಒಟ್ಟಿನಲ್ಲಿ "ಗಾಡಿ ಮುಂದೆ, ಎತ್ತು ಹಿಂದೆ" ಅಂತ ಆಗುತ್ತೇನೋ ಎನ್ನುವ ಭಯವಿದೆ [ಪಿಕ್ ಅಪ್‌ಗೆ ಯೋಜನೆ ತಯಾರಿಸುವುದು ಮುಂತಾದ ಸಿದ್ಧತೆ ನಡೆಯಲಿ. ಆದರೆ ಜಮೀನು ಮೊದಲು ಆಬಾದಿಗೆ ಬರಬೇಕೆಂದು ಅಭಿಪ್ರಾಯ.]

### ಜನತಾ ಮನೆ

ಇವರೆಲ್ಲರಿಗೂ ೧೯೮೧-೮೨ರಲ್ಲಿ ಜನತಾ ಮನೆ ಮಂಜೂರಾಗಿತ್ತು. ಆದರೆ ಒಬ್ಬ ವ್ಯಕ್ತಿ ಮಾತ್ರ ಮನೆ ಕಟ್ಟಿದ್ದಾನೆ. ಉಳಿದ ಹಲವರದೆಲ್ಲ ಹಂಚು, ನಾಟ ವಗೈರೆ ಮನೆಗೆ ತಲುಪದೆ ಎಲ್ಲೆಲ್ಲೋ ಉಳಿದು, ಹಂಚು ಅವರಿವರ ಪಾಲಾಯಿತು; ನಾಟ—ಅದರ ಕತೆ ಬಿಡಿ. ಪುಗಸಟ್ಟೆ ನಾಟ ಅಲ್ಲವ? ಅದು ಮನೆಯ ಮೇಲೇರದೆ ಕೆಳಗೇ ಕುಂಬಾಗಿ ಸದ್ಗತಿ ಕಂಡದ್ದು ಒಳ್ಳೆಯದೇ ಆಯಿತು— ಎನ್ನಲಾಗಿದೆ.

(ಹಿರೇಹುಲುಗಾರಿಗೆ ಗಾಡಿ ರಸ್ತೆ ಇಲ್ಲದ್ದರಿಂದ ಪಂಚಾಯ್ತಿಯವರು ಶಾನುವಳ್ಳಿ, ಬಿಲಗದ್ದೆ ಮುಂತಾದ ಕಡೆ ಹಂಚು ಇಳಿಸಿದ್ದರೂ ಇಟ್ಟಿದ್ದರು. ಅದನ್ನು ಇವರು ತಮ್ಮಲ್ಲಿಗೆ ಸಾಗಿಸಿಕೊಳ್ಳಬೇಕಿತ್ತು.)

### ಹಲ್ಲಿದ್ದರೆ ಕಡಲೆಯಿಲ್ಲ....

ಇಲ್ಲಿನ ಕೆಲವರಿಗೆ ಗಾಡಿ, ಕೆಲವರಿಗೆ ಎತ್ತು ದೊರೆತಿವೆ. ಆದರೆ, ಒಂದೇ ಕುಟುಂಬಕ್ಕೆ ಎರಡು ಸೌಲಭ್ಯ ಕೊಡಬಾರದು ಎಂಬುದರಿಂದಲೋ ಏನೋ, "ಹಲ್ಲಿದ್ದವನಿಗೆ ಕಡಲೆಯಿಲ್ಲ, ಕಡಲೆಯಿದ್ದವನಿಗೆ ಹಲ್ಲಿಲ್ಲ" ಎಂಬಂತಾಗಿರುವುದು ಒಂದು ವಿಪರ್ಯಾಸ. (ಈ ವಿಪರ್ಯಾಸ ಇಲ್ಲಿ ಮಾತ್ರವಲ್ಲ, ಎಲ್ಲಾ ಕಡೆಯೂ ಆಗಿರುವಂಥದೇ.) ಇದು ಸರ್ಕಾರದ ಗಮನಕ್ಕೆ ಇನ್ನೂ ಬರಬೇಕಷ್ಟೇ.

## ಚುನಾವಣೆರಾಜಕೀಯ:ಜನರಹೊಸಪ್ರವೃತ್ತಿ

ಈ ದೇಶದಲ್ಲಿ ಚುನಾವಣೆ ಎಂಬುದು ಶ್ರೀಮಂತ ವರ್ಗಗಳು ಬಡವರಲ್ಲಿ ಭ್ರಮೆ ಹುಟ್ಟಿಸಿ ತಮ್ಮ ಅಧಿಕಾರವನ್ನು ಭದ್ರವಾಗಿ ಮುಂದುವರಿಸುವ ಒಂದು ನಾಟಕ ಮಾತ್ರವಾಗಿದೆ. ಬರಬರುತ್ತ ಈ ನಾಟಕ ಬಯಲಾಗುತ್ತಿದೆ. ಜನ ಚುನಾವಣೆಯಲ್ಲಿ ಆಸಕ್ತಿ ಕಳೆದುಕೊಳ್ಳುತ್ತಿದ್ದಾರೆ. 'ಪ್ರಜಾಪ್ರಭುತ್ವ ಎಂದರೆ ಇದೇ. ನಮ್ಮದು ವಿಶ್ವದಲ್ಲೇ ಅತಿ ದೊಡ್ಡ ಪ್ರಜಾಪ್ರಭುತ್ವ' ಎಂದು ವಿಧವಿಧವಾದ ಪಕ್ಷಗಳು, ಪ್ರಜಾಪ್ರಭುತ್ವದ ಭಾರಿ 'ಪ್ರತಿಪಾದಕರು' ಡಮ್ಮಡಿ ಬಜಾಯಿಸಿ ಶಂಖ ಊದಿದರೂ ಜನರಿಗೆ ಇದಕ್ಕೂ ತಮಗೂ ಸಂಬಂಧವಿಲ್ಲವೆಂದು ಮನದಟ್ಟಾಗಿಬಿಟ್ಟಿದೆ. ಸಾಕಷ್ಟು ಹೊಟ್ಟೆ ತುಂಬಿದವರು ಹೊರತು ಜನ ಸಾಮಾನ್ಯರು ಚುನಾವಣೆ ಬಗ್ಗೆ ತಲೆ ಕೆಡಿಸಿಕೊಳ್ಳುವುದನ್ನು ಎಂದೋ ಬಿಟ್ಟಿದ್ದಾರೆ. (ಹಾಗೆ ನೋಡಿದರೆ ಅವರು ಹೆಚ್ಚು ತಲೆ ಕೆಡಿಸಿ ಕೊಂಡೇ ಇರಲಿಲ್ಲ.) ಈಗ ಚುನಾವಣೆ ಎಂದರೆ ಮನಸ್ಸಿಗೆ ತೀರಾ ಜಡ್ಡು ಹಿಡಿದಾಗ ಅಷ್ಟಿಷ್ಟು ಹರಟೆ ಮುದಗೊಳ್ಳುವ ಒಂದು ವಸ್ತುವಾಗಿದೆ. ಜನ ಓಟು ಹಾಕುವ ಪ್ರಮಾಣ ಶೇ. ೪೦-೪೨ಕ್ಕೆ ಬಂದಿರುವುದು ಇದಕ್ಕೊಂದು ಗುರುತು.

ಇದರಲ್ಲೂ ಇತ್ತೀಚೆಗೆ ಒಂದೆರಡು ಹೊಸ ತರದ ಬೆಳವಣಿಗೆಗಳು ಕಾಣಿಸಿಕೊಳ್ಳತೊಡಗಿವೆ. ಒಂದು–ನಾಯಕನೆನ್ನಿಸಿಕೊಳ್ಳುವವನನ್ನು ವೇದಿಕೆಯ ಮೇಲಿಂದಲೇ — ಜನತಾ ನ್ಯಾಯಾಲಯದ ರೀತಿ—ಪಾಟಿ ಸವಾಲಿಗೆ ಒಳಪಡಿಸುವುದು. ಎರಡು—ತಮ್ಮ ಹಳ್ಳಿಯ, ಊರಿನ, ಎಂದೂ ಬಗೆ ಹರಿಯದ ಸಮಸ್ಯೆಗಳನ್ನು ಬಗೆ ಹರಿಸಿಕೊಳ್ಳಲು ಜನರಿಂದ ಚುನಾವಣೆ ಬಹಿಷ್ಕಾರ.

ಈ ಪಾಟಿ ಸವಾಲು ಇನ್ನೂ ಅಷ್ಟು ಪ್ರಚಲಿತವಾಗಿಲ್ಲ. ಈ 'ನಾಯಕರು' ಚುನಾವಣೆ ಹೊರತು ಬೇರೆ ಸಮಯದಲ್ಲಿ ಕೈಗೇ ಸಿಗುವುದಿಲ್ಲ. ಸಿಕ್ಕರೂ ದಬಾಯಿಸುವ ತಾಕತ್ತಿನಲ್ಲಿರುತ್ತಾರೆ. ಆದರೆ ಓಟುಕೇಳಲು ಬಂದಾಗ ಅವರ ಪೊಗರೆಲ್ಲ ಇಳಿದಿರುತ್ತದೆ. ಆಗ ಜನ ಅವನ ಎಲ್ಲ ಅವ್ಯವಹಾರಗಳನ್ನು, ಮರೆತ ಮಾತುಗಳನ್ನೂ, ಇತರ ಹುಳುಕುಗಳೆಲ್ಲವನ್ನೂ ಸಾರ್ವಜನಿಕವಾಗಿ ಬಹಿರಂಗಪಡಿಸಿ, ಅವನ 'ಚಡ್ಡಿ ಬಿಚ್ಚಿಸುವುದು' ಸಾಧ್ಯ. ಅದಕ್ಕೆ ಹೆದರಿಯಾದರೂ ಅವನು ಐದು ವರ್ಷ ನಿಶ್ಚಿಂತೆಯಿಂದ ಇದ್ದವನು ಓಟು ಕೇಳಲು ಬರುವಾಗಲಾದರೂ ಏನಾದರೂ ಒಂದಿಷ್ಟು ಸಾಧನೆ ತೋರಿಸಬೇಕಾಗುತ್ತದೆ.

ಚುನಾವಣೆ ಬಹಿಷ್ಕಾರ ಕಳೆದ ಸಾರ್ವತ್ರಿಕ ಚುನಾವಣೆಯಲ್ಲಿ ಬಹಳ ಕಡೆ ಪ್ರಯೋಗಕ್ಕೆ ಬಂತು. ಸಾವಿರಾರು ಮತದಾರರಿರುವ ಊರು–ಹಳ್ಳಿಗಳೂ ತಮ್ಮ ಬೇಡಿಕೆ ಈಡೇರದೇ ಮತ ಹಾಕುವುದಿಲ್ಲ, ಯಾವ ಉಮೇದುವಾರನನ್ನೂ ಊರಿಗೆ ಬಿಡುವುದೂ ಇಲ್ಲ ಎಂದು ಘೋಷಿಸಿ, ಹಾಗೇ ಮಾಡಿದರು.

ಈ ಬಾರಿ ಈ ಅಸ್ತ್ರ ಇನ್ನೂ ವ್ಯಾಪಕವಾಗಿ ಬಳಕೆಯಾಗುವ ಸಾಧ್ಯತೆ ಇದೆ. ನಮ್ಮ ಕ್ಷೇತ್ರದಲ್ಲೂ ಈ ಗಾಳಿ ಸಂಚರಿಸತೊಡಗಿರುವ ವರದಿಗಳು ಬರುತ್ತಿವೆ.

ಶೃಂಗೇರಿ ತಾ||ನ ಹಾಲಂದೂರು ಪಂಚಾಯ್ತಿಗೆ ಸೇರಿದ ಗೋಣಿ ಬೀಳಲು ಗ್ರಾಮ ಹಾಗೂ ನ.ರಾ.ಪುರ ತಾಲೂಕಿನ "ಮೂಲನಿವಾಸಿಗಳ ಯುಗದ ದ್ವೀಪ" ಹೆಬ್ಬೆ ಗ್ರಾಮ ಈ ಹಾವಿ ತುಳಿಯುವ ಸೂಚನೆ ತೋರಿಸಿವೆಯೆಂದು ವರದಿಗಳು ಹೇಳುತ್ತವೆ.

ಈ ಎರಡೂ ಕಡೆಯ ಪ್ರಮುಖ ಸಮಸ್ಯೆ ತೀರ ಜುಜುಬಿ–ರಸ್ತೆ ಸಂಪರ್ಕ. ಸಾವಿರಾರು ಕೋಟಿ ವೆಚ್ಚದ ಬಾಹ್ಯಾಕಾಶ ಉಪಗ್ರಹಗಳು, ೧೩೦೦ ಕೋಟಿ ರೂ. ವೆಚ್ಚದ 'ಏಷ್ಯಾಡ್' ನಂಥ ಭೂರಿ ಮೇಳಗಳು, ಪುನಃ ಸಾವಿರಾರು ಕೋಟಿ ರೂ.ಗಳ ಬಣ್ಣದ ಟೆಲಿವಿಷನ್ ಯೋಜನೆಗಳು, ಬಡ ಜನರ ಉದ್ಧಾರಕ್ಕಾಗಿ ಹೊರದೇಶಗಳಿಂದ ಬೇಡಿ ತಂದದ್ದರ ಮೇಲಿನ ಸಾವಿರಾರು ಕೋಟಿ ರೂ. ಬಡ್ಡಿ — ಮುಂತಾದ ಈ ದೇಶದ ಕಿತ್ತು ತಿನ್ನುವ ಸಮಸ್ಯೆಗಳ ಮಧ್ಯೆ ಈ ಹಳೆಯ ಕಾಲದ ಜುಜುಬಿ ಸಮಸ್ಯೆಗಳ ಕಡೆ ಗಮನ ಕೊಡುತ್ತ ಕೂತರೆ ಪ್ರಪಂಚದಲ್ಲಿ ನಮ್ಮ ದೇಶ ಮುಂದುವರಿಯಬೇಡವೆ? ನಮಗೆ ಪುನಃ ಐದು ಸಾವಿರ ಕೋಟಿ ರೂ.ಗಳಷ್ಟು ದೊಡ್ಡ ಸಾಲಗಳೆಲ್ಲ ಸಿಗುವುದು ಬೇಡವೆ?

ಅದೇನೇ ಇರಲಿ. ಈ ಹೊಸ ಪ್ರವೃತ್ತಿಗಳು ಇನ್ನೂ ಹಬ್ಬುವುದು ಖಂಡಿತ. ಆದರೆ ಇವು ಕೇವಲ ನಾಲ್ಕಾಣೆ–ಎಂಟಾಣೆಯ ಬೇಡಿಕೆಗಳನ್ನು ಈಡೇರಿಸಿಕೊಳ್ಳುವಷ್ಟಕ್ಕೆ ನಿಲ್ಲಬಾರದು. ಈ ದೇಶದಲ್ಲಿ ನಿಜವಾದ ಪ್ರಜಾಪ್ರಭುತ್ವದ ನಡವಳಿಕೆಗಳು ಬೆಳೆದು ಬರಬೇಕು–ಪ್ರಜಾಪ್ರಭುತ್ವದ ಒಣ ಆಚರಣೆಗಳಲ್ಲ. ದೇಶದ ಬಹುಸಂಖ್ಯಾತ ಜನ ಸಾಮಾನ್ಯರಿಗೆ, ರೈತರಿಗೆ, ಕಷ್ಟಜೀವಿಗಳಿಗೆ ನಿಜವಾದ ಅರ್ಥದಲ್ಲಿ ಮಾನ್ಯತೆ, ಗೌರವ ಸಿಗ

(೩ನೇ ಪುಟಕ್ಕೆ)

## ಓದುಗರ ಪತ್ರಗಳು

# ಮೇಳ - ಅರ್ಥಹೀನ ಆಚರಣೆ

...ವನ್ನು ಕುರಿತು ...ರ ಪತ್ರವನ್ನು ...ಗಳನ್ನು ತಮ್ಮ ...ಪಸ್ವಿಗಳ ಸಮಾ ...ರಬರುತ್ತಾ ರಾ ...ಯ ಮುಟ್ಟಕ್ಕೆ ...ಳನ ನಡೆಯು ...ದೇ ಮೇಲು. ...ಳನ" ಎಂಬ ...ಲ್ಲ. ಇದಕ್ಕೆ ...ಶೇಷಣವನ್ನು ...ರು. ಕನ್ನಡವ ...ದೆಂದು ಹೇಳಿ ...ರು? ಹೋದವ ...ದರು., ಹಾಡಿ ...ಮುಸ್ಯೆಗಳು ಹಾ ...ಖಿಲ ಭಾರತ" ...ನೋ! "ವಿಶ್ವ ...ನ್ನು ಸೇರಿಸಿದ್ದಾ ... ಅಗ್ಗದ ಅನ್ಯ ...ಯೋಜನೆಯೊಂ ... ನಾಮೂಲಿ ...ಯಿಂದ ಇದು ...ಳವನ್ನು ನಡೆ ...ದನ್ನೇ ಕೈಗೆ ...ಕಟ್ಟಾಗಿರು ... "ವಿಶ್ವ ಕನ್ನ ... "ಬ್ರಹ್ಮಾಂ

ಡ ಕನ್ನಡ ಮೇಳ" ಎಂದು ನಡೆಸಬಹುದು. ಕೇವಲ ಹೆಸರನ್ನು ಬದಲಾಯಿಸುವುದರಿಂದ ಪರಿಣಾಮವು ಬದಲಾಗುವುದಿಲ್ಲ.

ಶ್ರೀ ಸುಬ್ರಹ್ಮಣ್ಯಂರವರು ಹೇಳಿದಂತೆ ತಮಿಳರು ವಿಶ್ವಸಮ್ಮೇಳನಗಳನ್ನು ನಡೆಸಿದ್ದಾರೆಂಬುದು ನಿಜ. ಅದರಲ್ಲಿ ಔಚಿತ್ಯವಿದೆ. ತಮಿಳರು ವಿಶ್ವಾದ್ಯಂತ ಹರಡಿದ್ದಾರೆ. ಅವರು ಎಲ್ಲಿದ್ದರೂ ತಮಿಳರಾಗಿಯೇ ಇದ್ದಾರೆ. ಹೊರದೇಶದ ದ್ದೂ ಉತ್ತಮ ತಮಿಳು ಕೃತಿಗಳನ್ನು ಬರೆದ ತಮಿಳರಿದ್ದಾರೆ. ಅಂಥವರನ್ನು ಒಂದು ವೇದಿಕೆಗೆ ತರುವ ಉದ್ದೇಶದಿಂದ ಅವರು ನಡೆಸಿದರು. ಕನ್ನಡದಲ್ಲಿ ಹಾಗಿದೆಯೇ? ಹೊರದೇಶಗಳಲ್ಲಿ ಬೇರೆ ಬೇರೆ ವೃತ್ತಿಗಳಲ್ಲಿ ನಿರತರಾಗಿರುವ ಕನ್ನಡಿಗರು ಹಲವರಿದ್ದಾರೆ. ಅವರಲ್ಲನೇಕರು ಅಲ್ಲಿಯೇ ನೆಲೆಸುವ ಉದ್ದೇಶದಿಂದ ಮನೆಯಲ್ಲಿಯೂ, ಅಪರೂಪಕ್ಕಾಗಿಯೂ ಕನ್ನಡವನ್ನು ಬಳಸುವುದಿಲ್ಲ. ಅವರ ಮಕ್ಕಳಿಗೆ ಆಂಗ್ಲ ಭಾಷೆಯೇ ಮಾತೃಭಾಷೆಯಾಗಿದೆ. ಕೃತಿರಚನೆ ಮಾಡುವುದು ಹಾಗಿರಲಿ ಇರುವ ಕೃತಿಗಳನ್ನೇ ಓದುವ ಅಪೇಕ್ಷೆ ಅವರಲ್ಲಿ ಅನೇಕರಿಗಿಲ್ಲ. ವಿಶ್ವ ಕನ್ನಡ ಮೇಳದ ಹೆಸರಿನಲ್ಲಿ ಇಂಥವರನ್ನು ಕರೆಸಿ ಜೊಂಬ್ಡಿ ಬಜಾಯಿಸುವುದರಿಂದ ಕನ್ನಡ ಹೇಗೆ ಪುಷ್ಟವಾಗುತ್ತದೆಂದು ನನಗರ್ಥವಾಗುವುದಿಲ್ಲ.

ಡಿಸೆಂಬರ್ ತಿಂಗಳ ಕೊನೆಯಲ್ಲಿ ಶಿರಸಿಯಲ್ಲಿ "ಅಖಿಲ ಭಾರತ" ಮಟ್ಟದ ಸಮ್ಮೇಳನ ನಡೆಯಲಿದೆ. ಅದಾದ ೩೦ ದಿನಗಳೊ

(೪ನೇ ಪುಟಕ್ಕೆ)

---



---

## ಸವಲತ್ತು ಪಡೆದವರಿಗೇ ಮತ್ತಷ್ಟು ಸವಲತ್ತು?

ಹಾಲಿ ಅಂಗನವಾಡಿ ಕಾರ್ಯಕರ್ತೆಯರಾಗಿ ಆಯ್ಕೆಯಾಗಿರುವವರಲ್ಲಿ ಕೆಲವರಿಗೆ ಜೇನು ಪೋಷಣೆ ತರಬೇತಿ, 'ಟ್ರೈಸಂ'ನಲ್ಲಿ ಹೊಲಿಗೆ ತರಬೇತಿ ವಗೈರೆ ನೀಡಲಾಗಿತ್ತು; ಪುನಃ ಅವರನ್ನೇ ಇನ್ನೊಂದು ಸೌಲಭ್ಯಕ್ಕೆ ಆಯ್ಕೆ ಮಾಡಬೇಕೆಂದರೆ, ಬೇರೆ ಅರ್ಹರು ಇರಲಿಲ್ಲವೇ?

ಹಾಗೂ, ಅಭ್ಯರ್ಥಿಗಳನ್ನು ಸೂಚಿಸಲು ತಾ.ಅ.ಮಂ. ಸದಸ್ಯರಿಗೂ ಅಧ್ಯಕ್ಷರಿಗೂ ಇದ್ದ ಪ್ರಮಾಣವನ್ನು ಮೀರಿ ಎಲ್ಲರನ್ನೂ ಅವರುಗಳ ಸಲಹೆಯಂತೆಯೇ ಆಯ್ಕೆ ಮಾಡಲಾಗಿದೆ. ಇದು ಭ್ರಷ್ಟಾಚಾರಕ್ಕೆ ಅವಕಾಶ ಕೊಟ್ಟಿಲ್ಲವೆ?

**—ಒಬ್ಬ ನಾಗರಿಕ, ಕೊಪ್ಪ.**

ಈ ಪತ್ರಕ್ಕೆ ಪ್ರತಿಕ್ರಿಯೆ ಕೇಳಿ ಕೊಪ್ಪ ಕ್ಷೇತ್ರಾಭಿವೃದ್ಧಿ ಅಧಿಕಾರಿಗಳಿಗೆ ಬರೆದ ನಮ್ಮ ೯-೧೧-೮೨ರ ಪತ್ರಕ್ಕೆ ಇನ್ನೂ ಉತ್ತರ ಬರಲಿಲ್ಲ. **—ಸಂಪಾದಕ.**

---

# ಗ್ರಾಮಾಂತರ ಸುದ್ದಿಗಳು

### ಕಾಂಪೋಸ್ಟ್ ಶಿಕ್ಷಣ ಶಿಬಿರ

ಶಾನುವಳ್ಳಿ: ನ. ೧೫ರಂದು ಇಲ್ಲಿನ ಪಂಚಾಯಿತ್ತಿ ಅಧ್ಯಕ್ಷರಾದ ಮೂಗ ಶ್ರೀನಿವಾಸ್ ಇವರ ಅಧ್ಯಕ್ಷತೆಯಲ್ಲಿ "ಸಾವಯವ ಗೊಬ್ಬರ ತಯಾರಿಕೆ ಶಿಕ್ಷಣ ಶಿಬಿರ" ನಡೆಯಿತು. ಮುಖ್ಯ ಅತಿಥಿಗಳಾಗಿ ಎ.ಬಾಲಚಂದ್ರರಾವ್ ಹಾಗೂ ಜಯಂತ್‌ರವರು ಮಾತನಾಡಿದರು. ಸಹಕೃಷಿ ನಿರ್ದೇಶಕರಾದ ಎಂ.ಎಸ್.ಸುಬ್ಬಯ್ಯ ಗೌಡರು ಕಾಂಪೋಸ್ಟ್ ತಯಾರಿಕೆ ಬಗ್ಗೆ ವಿವರಣೆ ನೀಡಿದರು. ಸಹಾಯಕ ಕೃಷಿ ಅಧಿಕಾರಿಗಳಾದ ವೆಂಕಟಭಟ್‌ರವರು ಪ್ರಾತ್ಯಕ್ಷಿಕೆ ಮಾಹಿತಿ ನೀಡಿದರು. ಯುವಕ ಸಂಘದ ಅಧ್ಯಕ್ಷರಾದ ಕ್ಷೇತ್ರಪಾಲರು ಸ್ವಾಗತಿಸಿ, ವಯಸ್ಕ ಶಿಕ್ಷಣ ಉಪಾಧ್ಯಾಯ ಹೆಚ್.ಎಂ.ಶಿವಪ್ಪ ವಂದಿಸಿದರು. ಶಾನುವಳ್ಳಿ ವಲಯದ ಕೃಷಿ ಸಹಾಯಕರಾದ ಕೆ.ಎಸ್.ರಾಮಚಂದ್ರ ಇವರು ವಯಸ್ಕ ಶಿಕ್ಷಣಾರ್ಥಿಗಳ ಸಹಕಾರ ದೊಂದಿಗೆ ಕಾರ್ಯಕ್ರಮ ಯೋಜಿಸಿದ್ದರು.

### ಶಾಲೆಗೆ ಕೀರ್ತಿ

ಉತ್ತಮೇಶ್ವರ: ಇಲ್ಲಿನ ಹಿರಿಯ ಪ್ರಾಥಮಿಕ ಪಾಠಶಾಲೆಯ ಏಳನೇ ದರ್ಜೆಯಲ್ಲಿ ವ್ಯಾಸಂಗ ಮಾಡುತ್ತಿರುವ ಮರಿಯ ಎಂಬ ಹರಿಜನ ಬಾಲಕನು ಚಿಕ್ಕಮಗಳೂರು ಜಿಲ್ಲಾ ಮಟ್ಟದ ಆಟೋಟ ಸ್ಪರ್ಧೆಯ ಚೆಂಡು ಎಸೆತದಲ್ಲಿ ಪ್ರಥಮ ಸ್ಥಾನವನ್ನು ಗಳಿಸಿ ಶಾಲೆಗೆ ಪರ್ಯಾಯ ಫಲಕವನ್ನೂ ಕೀರ್ತಿಯನ್ನೂ ಸಂಪಾದಿಸಿರುತ್ತಾನೆಂದು ಮುಖ್ಯೋಪಾಧ್ಯಾಯ ಜಿ.ಕೆ.ಹಿರಿಯಣ್ಣಯ್ಯ ತುಂಬು ಹೆಮ್ಮೆಯಿಂದ 'ಮುಂಜಾವು'ಗೆ ತಿಳಿಸಿದ್ದಾರೆ.

### ಯಕ್ಷಗಾನ ತಾಳಮದ್ದಲೆ

ಹುಲುಗಾರು: ದಿ|| ೨೦-೧೧-೮೨ರಂದು ಬೆಳಿಗ್ಗೆ ಹುಲುಗಾರು ಸುಬ್ಬರಾಯರ ಮನೆಯಲ್ಲಿ 'ಮಲೆನಾಡು ಯಕ್ಷಗಾನ ಕಲಾ ಕೇಂದ್ರ, ಹರಿಹರಪುರ'—ಇದರ ಸದಸ್ಯರು ಹಾಗೂ ಸ್ಥಳೀಯ ಕಲಾವಿದರುಗಳಿಂದ (ವೀರಮಣಿ ಕಾಳಗ ಹಾಗೂ ರುಕ್ಮಾಂಗದ ಚರಿತ್ರೆ) ಯಕ್ಷಗಾನ ತಾಳಮದ್ದಲೆ ನಡೆಯಿತು. ಹೆಚ್.ಎಸ್.ರಾಮಮೂರ್ತಿ ಸ್ವಾಗತಿಸಿ ಜೆ.ಎಸ್.ನಾಗರಾಜ್ ಪಾತ್ರಪರಿಚಯ ಮಾಡಿದರು.

ಕೊನೆಯಲ್ಲಿ ಎಂ. ಎಲ್. ರಾಮಚಂದ್ರರಾವ್, ಕಾರ್ಯಕ್ರಮಕ್ಕೆ ಅವಕಾಶ ಮಾಡಿಕೊಟ್ಟ ಸುಬ್ಬರಾವ್ ಮತ್ತು ಕುಟುಂಬದವರಿಗೆ ಕಲಾವಿದರ ಪರವಾಗಿ ಆಭಾರ ಮನ್ನಿಸಿ ಯಕ್ಷಗಾನ ಕಲೆಯ ಅಭಿವೃದ್ಧಿಗಾಗಿ ಸಹಕರಿಸುವಂತೆ ಸಭಿಕರಲ್ಲಿ ಕೇಳಿಕೊಂಡರು. ಹೆಚ್.ಕೆ.ಸುಬ್ಬರಾಯರು ಕಲಾವಿದರಿಗೂ ಸಭಿಕರಿಗೂ ವಂದಿಸಿದರು.

### ನೂತನ ಕಟ್ಟಡ ಉದ್ಘಾಟನೆ

ಅತ್ತಿಕೊಡಿಗೆ: ಇಲ್ಲಿನ ವ್ಯ.ಸೇ. ಸಹಕಾರಿ ಸಂಘದ ಹೊಸ ಕಟ್ಟಡವನ್ನು ನ. ೨೫ರಂದು ಪೇಜಾವರ ಮಠಾಧೀಶರು ನೆರವೇರಿಸಿದರು. ಚಿಕ್ಕಮಗಳೂರು ಜಿ.ಸ.ಕೇಂದ್ರ ಬ್ಯಾಂಕಿ ಅಧ್ಯಕ್ಷ ಟಿ.ಡಿ.ರಾಮಚಂದ್ರಪ್ಪ ಅಧ್ಯಕ್ಷತೆ ವಹಿಸಿದ್ದರು. ಬಿ.ಚನ್ನಪ್ಪ, ದೀಪಕ್ ರಾಜ್, ಬಿ.ಎನ್.ವಾಸುದೇವ ಮೂರ್ತಿ ಮುಖ್ಯ ಅತಿಥಿಗಳಾಗಿದ್ದರು. ಎಸ್. ಕೃಷ್ಣ ರಾವ್ ಮಾಜಿ ಅಧ್ಯಕ್ಷರುಗಳನ್ನು ಸನ್ಮಾನಿಸಿದರು. ಟಿ.ಆರ್.ಶಂಕರ ಹೆಗ್ಡೆ ಸ್ವಾಗತಿಸಿದರು. ಬಿ.ಎಚ್.ಭಾಸ್ಕರ್ ಸಂದೇಶ ಓದಿದರು. ಜಿ.ಕೆ.ಚಂದ್ರಶೇಖರ್ ವಂದಿಸಿದರು.

ಸಂಜೆ ಮನರಂಜನಾ ಕಾರ್ಯಕ್ರಮಗಳು ಜರುಗಿದವು.

### ಮಕ್ಕಳ ದಿನಾಚರಣೆ

ಶಾಂತಿಗ್ರಾಮದ ಯುವಕ ಸಂಘ ಮತ್ತು ಯುವತಿ ಮಂಡಳಿಗಳ ಸಂಯುಕ್ತ ಆಶ್ರಯದಲ್ಲಿ ನಡೆದ ಮಕ್ಕಳ ದಿನಾಚರಣೆ ಸಮಾರಂಭದ ಅಧ್ಯಕ್ಷತೆಯನ್ನು ಜೆ.ಸಿ.ಸುಬ್ರಾಯ್ ವಹಿಸಿದ್ದರು. ಕಾರ್ಪೊರೇಶನ್ ಬ್ಯಾಂಕ್ ಮ್ಯಾನೇಜರ್ ಸೀತಾರಾಂ ಪ್ರಭು ಮುಖ್ಯ ಅತಿಥಿಗಳಾಗಿದ್ದರು. ಚರ್ಚಾಸ್ಪರ್ಧೆ ಮತ್ತು ರಂಗವಲ್ಲಿ ಸ್ಪರ್ಧೆಗಳಲ್ಲಿ ಗೆದ್ದವರಿಗೆ ಪಂಚಾಯಿತ್ತಿ ಅಧ್ಯಕ್ಷ ಅಬ್ದುಲ್ ರಹಿಮಾನ್ ಬಹುಮಾನ ನೀಡಿದರು.

(ವರದಿ: ಎಂ.ಬಿ.ಗಂಗಾಧರ್)

### ವಾರ್ಷಿಕ ಮಹಾಸಭೆ

ಹಾಲಂದೂರು: ಇಲ್ಲಿನ ಯುವಕ ರೈತ ಸಂಘದ ೧೯೮೨ ೮ನೇ ಸಾಲಿನ ವಾರ್ಷಿಕ ಮಹಾಸಭೆ ೫-೧೧ರಂದು ಹೆಚ್.ಕೆ. ಗಣಪತಿಯವರ ಅಧ್ಯಕ್ಷತೆಯಲ್ಲಿ ನಡೆದು, ಈ ಕೆಳಕಂಡವರು ನೂತನ ಕಾರ್ಯಕಾರಿ ಸಮಿತಿಗೆ ಆಯ್ಕೆಯಾಗಿದ್ದಾರೆ:

ಹೆಚ್. ಜಿ. ಹಿರಿಯಣ್ಣಪ್ಪ (ಅಧ್ಯಕ್ಷ), ಬಿ.ಆರ್.ನರಸಿಂಹಮೂರ್ತಿ (ಉಪಾಧ್ಯಕ್ಷ), ಬಿ. ಜಿ. ರಾಮಮೂರ್ತಿ (ಕಾರ್ಯದರ್ಶಿ), ಹೆಚ್.ಕೆ.ಗಣಪತಿ, ಕೆ.ಬಿ.ರಾಮಮೂರ್ತಿ, ಬಿ.ಎಂ.ಗಣಪತಿ, ಎಂ.ಕೆ.ಶ್ರೀಕಂಠ, ಬಿ.ಎ.ಕೃಷ್ಣಮೂರ್ತಿ, ಹೆಚ್.ಎಸ್.ಚಂದ್ರಶೇಖರ, ಎ.ಆರ್.ರಮಾಕಾಂತ, ಹೆಚ್.ಆರ್.ವೆಂಕಟೇಶ, (ಸದಸ್ಯರು).

---

## ಚುನಾವಣೆ ರಾಜಕೀಯ

(೨ನೇ ಪುಟದಿಂದ)

ಬೇಕು. ಹಾಗಾದಾಗ ಮಾತ್ರ 'ಪ್ರಜಾಪ್ರಭುತ್ವ' ಎಂಬುದಕ್ಕೆ ಅರ್ಥ ಬರುವುದು.

ಈಗ ಹಬ್ಬುತ್ತಿರುವ ಹೊಸ ಪ್ರವೃತ್ತಿಗಳು ಈ ವಿಶಾಲವಾದ ಜೀವನಶೈಲಿಯ ಕಡೆ ಮುಂದುವರಿದರೆ ಮಾತ್ರ ಈ ದೇಶದ ಜನಗರಿ ಒಂದು ನೆಮ್ಮದಿ ದೊರೆಯಿತು.

## ಸ.ಇ. ಪುಟ್ಟಸ್ವಾಮಿ ಗೌಡರಿಗೆ ಲಕ್ಕವಳ್ಳಿಗೆ ವರ್ಗ

ಕೊಪ್ಪ: ಇಲ್ಲಿನ ಠಾಣೆಯ ಸಬ್ ಇನ್ಸ್‌ಪೆಕ್ಟರಾಗಿ ದಕ್ಷರೆಂದು ಜನಪ್ರಿಯತೆ ಗಳಿಸಿ, ಅದೇ ಕಾರಣದಿಂದ (?) ನಾಲ್ಕು ತಿಂಗಳ ಹಿಂದೆ ಅಮಾನತಿಗೊಳಗಾಗಿದ್ದ ಪುಟ್ಟಸ್ವಾಮಿ ಗೌಡರ ಅಮಾನತು ತೆರವಾಗಿದ್ದು, ಅವರಿಗೆ ಲಕ್ಕವಳ್ಳಿ ಠಾಣೆಗೆ ವರ್ಗವಾಗಿದೆ.

ಅಮಾನತಿನ ಆಜ್ಞೆ ಅನ್ಯಾಯದ್ದೆಂದು ಅನಿಸಿದಾಗ ರಾಜೀನಾಮೆ ಎಸೆವ ಎದೆಗಾರಿಕೆ ತೋರಿಸಿದ್ದ ಗೌಡರು ಇಂಥವಕ್ಕೆಲ್ಲ ಹೆದರದೆ, ಕಾಳಸಂತೆ–ಕಳ್ಳ ಸಾಗಣೆಖೋರರಿಗೆ, (ಎಲ್ಲಾ ಪಕ್ಷಗಳ) ಸ್ವಾರ್ಥಿರಾಜಕಾಣಿಗಳಿಗೆ ಮಣಿಯದೆ, ಬಡಬಗ್ಗರಿಗೆ ನ್ಯಾಯ ದೊರಕಿಸಲು ತಮ್ಮ ಹೆಣಗಾಟ ಮುಂದುವರಿಸಲೆಂದು 'ಮುಂಜಾವು' ಬಳಗದ ಹಾರೈಕೆ.

## ನ.ರಾ.ಪುರ ನಿವೃತ್ತಿದಾರರ ಸಂಘದ ಸಭೆ

ನ.ರಾ.ಪುರ: ಇಲ್ಲಿನ ನಿವೃತ್ತಿದಾರರ ಸಂಘದ ಸಭೆ ನ. ೧೩ರಂದು ವಾಮನಮೂರ್ತಿಗಳ ಅಧ್ಯಕ್ಷತೆಯಲ್ಲಿ ನಡೆಯಿತು.

೧-೪-೮೨ರಿಂದ ಸರ್ಕಾರ ನಿವೃತ್ತರಿಗೆ ಶೇ. ೧.೮೫ರ ಪ್ರಮಾಣದ ತುಟ್ಟಿ ಭತ್ಯೆ ಮಂಜೂರು ಮಾಡಿರುವ ಬಗ್ಗೆ ಸಭೆ ಕೃತಜ್ಞತೆ ಸೂಚಿಸಿತು.

ಕನಿಷ್ಠ ನಿವೃತ್ತಿ ವೇತನವನ್ನು ೩೫೦ ರೂ.ಗಳಿಗಾದರೂ ಏರಿಸಬೇಕೆಂದು ಸಣ್ಣ ಪೆನ್‌ಶನ್‌ದಾರರ ಸಂಘವು ರಾಜ್ಯ ಹೈಕೋರ್ಟಿನಲ್ಲಿ ಹೂಡಿರುವ ದಾವೆಯು ನ್ಯಾಯಸಮ್ಮತವಾಗಿದೆಯೆಂದು ಅಭಿಪ್ರಾಯಪಟ್ಟ ಸಭೆ ಸದರಿ ಸಂಘದ ಅಧ್ಯಕ್ಷರಿಗೆ ೫೦ ರೂ.ಗಳನ್ನು ಕಳಿಸಿಕೊಡಲು ಸರ್ವಾನುಮತದಿಂದ ತೀರ್ಮಾನಿಸಿತು.

## ವಿಶ್ವ ಕನ್ನಡ ಮೇಳ

(೩ನೇ ಪುಟದಿಂದ)

ಆಗೇ ವಿಶ್ವ ಕನ್ನಡ ಮೇಳವು ನಡೆಯಲಿದೆ. ಇದು ಏಳಲಾರದವನ ನೆತ್ತಿಯ ಮೇಲೆ ಬಂಡೆಯನ್ನು ಎತ್ತಿಟ್ಟಂತೆಯೇ ಸರಿ.

ಒಂದು ಕಡೆ ಕನ್ನಡಿಗರನ್ನು ಒದ್ದೋಡಿಸುತ್ತಿದ್ದರೆ ಇನ್ನೊಂದೆಡೆಯಲ್ಲಿ ಅದ್ದೂರಿಯ ಸಮಾರಂಭದ ಸಿದ್ಧತೆ ನಡೆದಿದೆ. ಈ ನಾಡಿನಲ್ಲಿಯೇ ಕನ್ನಡವು ಪ್ರಥಮ ಭಾಷೆಯಾಗುವುದು ವಿವಾದದ ಸುಳಿಯಲ್ಲಿಯೇ ಉಳಿದಿರುವಾಗ ಅದನ್ನು ವಿಶ್ವಮಟ್ಟಕ್ಕೇರಿಸುವ ಚಪಲ ಹಾಸ್ಯಾಸ್ಪದವೇ ಸರಿ. ಎರಡು ಸಮ್ಮೇಳನಗಳಲ್ಲಿ ಒಂದನ್ನು ಕೈಬಿಟ್ಟು, ಆ ಹಣವನ್ನು ಮೇಲ್ಕಂಡ ಸಮಸ್ಯೆಗಳ ನಿವಾರಣೆಗಾಗಿ ಬಳಸುವುದು ಸೂಕ್ತವೆನ್ನಿಸುತ್ತದೆ.

ಡಾ|| ಎಸ್.ವಿ.ಮಲ್ಲಿಕಾರ್ಜುನ ಭಟ್ಟ
ಕೊಪ್ಪ.

ಸಂಪಾದಕ, ಮುದ್ರಕ ಮತ್ತು ಪ್ರಕಾಶಕ:
ಸಿರಿಮನೆ ನಾಗರಾಜ್.
ಅಚ್ಚು: ದೀವಟಿಗೆ ಅಚ್ಚುಕೂಟ, ಕೊಪ್ಪ

## ಕೊಪ್ಪದಲ್ಲಿ ನ. ೨೧ರ ವ್ಯಾಪಾರದಲ್ಲಿ ಅಡಿಕೆ ಧಾರಣೆ

ಕೊಪ್ಪ: ಇಲ್ಲಿನ "ಮ್ಯಾಮ್ಕೋಸ್" ಶಾಖೆಯಲ್ಲಿ ನ. ೨೧ರ ಭಾನುವಾರ ಬಿಕರಿಯಾದ ಅಡಿಕೆ ಧಾರಣೆ ಈ ಕೆಳಕಂಡಂತಿದೆ:

ಹಸ: ೧೭೩೯ ರಿಂದ ೨೧೮೯; ಬೆಟ್ಟೆ: ೧೧೧೦—೧೩೪೬; ಗೊರಬಲು: ೪೦೧—೭೩೯.

ಈ ಶಾಖೆಯಲ್ಲಿ ಮುಂದಿನ ವ್ಯಾಪಾರ ನಡೆಯುವ ದಿನ: ೫-೧೨-೮೨ರ ಭಾನುವಾರ

## ಬ್ರಾಹ್ಮಣ ಮಹಾಸಭೆಯಿಂದ ಪ್ರೋತ್ಸಾಹ ಬಹುಮಾನ

ಕೊಪ್ಪ ತಾಲ್ಲೂಕು ಬ್ರಾಹ್ಮಣ ಮಹಾಸಭೆಯವರು ತಾಲ್ಲೂಕಿನ ಪ್ರೌಢ ಶಾಲೆಗಳಲ್ಲಿ 1982 ಏಪ್ರಿಲ್‌ನಲ್ಲಿ ನಡೆದ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಅತಿ ಹೆಚ್ಚು ಅಂಕಗಳನ್ನು ಮತ್ತು ಸಂಸ್ಕೃತದಲ್ಲಿ ಅತಿ ಹೆಚ್ಚು ಅಂಕಗಳನ್ನು ಪಡೆದು ಮುಂದೆ ಓದುತ್ತಿರುವ ಬ್ರಾಹ್ಮಣ ವಿದ್ಯಾರ್ಥಿ ವಿದ್ಯಾರ್ಥಿನಿಯರಿಗೆ ಪ್ರೋತ್ಸಾಹ ಬಹುಮಾನಗಳನ್ನು ಘೋಷಿಸಿದ್ದಾರೆ. ವಿದ್ಯಾರ್ಥಿಗಳಲ್ಲಿ: ಎಸ್. ಎಸ್. ಎಲ್. ಸಿ. ಒಟ್ಟು ಅಂಕ: ಕೆ.ಎಸ್.ರಾಮಸ್ವಾಮಿ, ಜಯಪುರ ಪ್ರೌಢ ಶಾಲೆ; (2) ಸಂಸ್ಕೃತ. ಗಣಪತಿ ಎಸ್. ಸಭಾಹಿತ್, ಹರಿಹರಪುರ; ವಿದ್ಯಾರ್ಥಿನಿಯರಲ್ಲಿ: 1) ಎಸ್. ಎಸ್.ಎಲ್.ಸಿ. ಒಟ್ಟು ಅಂಕ: ಕು|| ಹೆಚ್.ಆರ್.ಯಶೋದಾ, ಬಸ್ರಿಕಟ್ಟೆ ಪ್ರೌಢ ಶಾಲೆ. 2) ಸಂಸ್ಕೃತ. ಕು|| ಶಶಿಕಲಾ ಎನ್. ವಿ., ಜಯಪುರ ಪ್ರೌಢ ಶಾಲೆ—

ಈ ಬಹುಮಾನಗಳನ್ನು ಮಹಾಸಭೆಯ 1982ನೇ ವಾರ್ಷಿಕ ಸರ್ವಸದಸ್ಯ ಸಭೆಯಲ್ಲಿ ಕೊಡಲಾಗುವುದು.



## ಕರ್ಣಾಟಕ ಬ್ಯಾಂಕ್ ಲಿಮಿಟೆಡ್

ಆಡಳಿತ ಕಛೇರಿ ಮಂಗಳೂರು.೩

**ಶಾಖೆ: ಮೇಲ್‌ಪಾಲ್—577161**

## ಏಲಂ ನೋಟೀಸ್

ಈ ಕೆಳಗೆ ಕಾಣಿಸಿದ ಮಹನೀಯರುಗಳು, ನಮ್ಮ ಶಾಖೆಯಿಂದ ಚಿನ್ನದ ಆಭರಣಗಳ ಮೇಲೆ ಪಡೆದ ಸಾಲವನ್ನು ವಾಯಿದೆಗೆ ಸರಿಯಾಗಿ ಮರುಪಾವತಿ ಮಾಡದೆ ಇದ್ದುದರಿಂದ, ಈ ಹಿಂದೆ ಸ್ಪ್ರೀಡ್ ಡಿಲ್ ರಿಜಿಸ್ಟ್ರ ನೋಟೀಸು ಮೂಲಕ ವಾಯಿದೆ ಕೊಟ್ಟರೂ ಸಹ ಆಭರಣಗಳನ್ನು ಬಿಡಿಸದೆ ಇದ್ದುದರಿಂದ, ಈ ಮೂಲಕ ತಿಳಿಸುತ್ತಿಸುವುದೇನೆಂದರೆ, ಸಾಲದ ಪೂರ್ತಿ ಬಾಬ್ತು ನಮಗೆ ಬರಬೇಕಾದ ಎಲ್ಲ ಮೊಬಲಗನ್ನು ತಾ|| ೧೪-೧೨-೮೨ರ ಮಧ್ಯಾಹ್ನ ೧ ಗಂಟೆಯ ಒಳಗೆ ಮರುಪಾವತಿ ಮಾಡಲು ತಪ್ಪಿದಲ್ಲಿ, ಸದ್ರಿಯವರು ಅಡವಿಟ್ಟ ಚಿನ್ನದ ಆಭರಣಗಳನ್ನು ಬ್ಯಾಂಕಿನ ಆವರಣದಲ್ಲಿ ಬಹಿರಂಗವಾಗಿ ತಾ|| ೧೪-೧೨-೮೨ರಂದು ಅಪರಾಹ್ನ ೩ ಗಂಟೆಗೆ ಹರಾಜು ಮಾಡಲಾಗುವುದು—ಯಾ—ಬ್ಯಾಂಕಿಗೆ ಸೂಕ್ತ ಕಂಡ ಇತರ ದಿನಗಳಲ್ಲಿ ನೋಟೀಸನ್ನು ಪುನಃ ಕೊಡದೆ, ಬಹಿರಂಗವಾಗಿ—ಯಾ—ಖಾಸಗಿಯಾಗಿ ಹರಾಜು ಮಾಡಲಾಗುವುದು.

ಈ ಸಂಬಂಧವಾಗಿ ಬ್ಯಾಂಕಿಗೆ ಉಂಟಾಗಬಹುದಾದ ಸಕಲ ಖರ್ಚಿನ ನಷ್ಟವನ್ನು ಕೊಡಲು ಸದರಿ ಸಾಲಗಾರರೇ ಜವಾಬ್ದಾರರಾಗಿರುತ್ತಾರೆ. ಅಲ್ಲದೆ, ನಮ್ಮ ಶಾಖೆಯಲ್ಲಿ ಇನ್ನಿತರ ಯಾವುದೇ (ವೈಯಕ್ತಿಕ ಅಥವಾ ಸಹ) ಸಾಲವಿದ್ದರೆ, ಆಭರಣಗಳಿಂದ ಮಾರಿ ಬಂದ ಹಣವನ್ನು ಸಾಲಕ್ಕೆ ಜಮಾ ಮಾಡುವುದಕ್ಕೆ ಬ್ಯಾಂಕಿಗೆ ಸಂಪೂರ್ಣ ಅಧಿಕಾರವಿರುತ್ತದೆ.

| ಸಂಖ್ಯೆ | ಸಾಲಗಾರರ ಹೆಸರು ಮತ್ತು ವಿಳಾಸ | ತಾ|| 25.11.82ರ ವರೆಗಿನ ಬಾಕಿ ಬರಬೇಕಾದ ಹಣ ರೂ. ಪೈ. |
|---|---|---|
| 191/80 | ಶ್ರೀ. ಎಚ್. ಪಿ, ಗುರುಮೂರ್ತಿ ಬಿನ್ ಪುಟ್ಟೇಗೌಡ, ವ್ಯವಸಾಯಗಾರ, ಹಡ್ಲುಗದ್ದೆ, ತುಪ್ಪೂರು, ಮೇಲ್ಪಾಲ್ ಅಂಚೆ. | 528 . 00 |
| 225/80 | —ಡಿಟೋ— | 248 . 50 |

ತಾರೀಖು 25-11-82
ಮೇಲ್‌ಪಾಲ್.

ಎನ್.ರಾಘವಾಚಾರ್
ಮ್ಯಾನೇಜರ್,
ಕರ್ಣಾಟಕ ಬ್ಯಾಂಕ್.